# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 389 |
| ಸದಸ್ಯರ ಹೆಸರು | : | ಶ್ರೀ ಕೆ.ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 17.07.2019 |
| ಉತ್ತರಿಸುವವರು | : | ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳ್ತಂಗಡಿ ತಾಲ್ಲೂಕು ನೆರಿಯ ಗ್ರಾಮದ ಸರ್ವೆ ನಂ. 144/145 ರಲ್ಲಿ ಮೀಸಲು ಅರಣ್ಯಗಳ ಅಧಿಸೂಚನೆಗಳ ಆಧಾರದಲ್ಲಿ ಮೀಸಲು ಅರಣ್ಯಗಳ ಗಡಿಯನ್ನು ಗ್ರಾಮ ನಕ್ಷೆಯ ಮೇಲೆ ಗುರುತಿಸಿ, ಪಹಣಿ ಇಂಡೀಕರಿಸುವ ಕುರಿತಂತೆ ಕಚೇರಿ ಪತ್ರ ಸಂಖ್ಯೆ:ಬಿ1/ಕಾಯೋಶಿ/ಮೋಜಣಿ ಸಿಆರ್14 /2017-18, ದಿನಾಂಕ: 26.09.2018ಕ್ಕೆ ಸಂಬಂಧಿಸಿದಂತೆ ವಿಸ್ತೃತ ವರದಿಯೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು; | ಬೆಳ್ತಂಗಡಿ ತಾಲೂಕು ನೆರಿಯ ಗ್ರಾಮದ ಸರ್ವೆ ನಂ. 144 / 145 ರ ಮೋಜಣಿ ಕಾರ್ಯಕ್ಕೆ ಸಂಬಂಧಿಸಿದಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಗಳೂರು ವಿಭಾಗ, ಮಂಗಳೂರು ರವರ ಪತ್ರ ದಿನಾಂಕ: 04-05-2017 ರಲ್ಲಿ ಸಹಾಯಕ ಆಯುಕ್ತರು ಪುತ್ತೂರು ಇವರಿಗೆ ಹಾಗೂ ವಲಯ ಅರಣ್ಯ ಅಧಿಕಾರಿ, ಬೆಳ್ತಂಗಡಿ ವಲಯ ಇವರ ಪತ್ರ ದಿನಾಂಕ: 19/26-11-2016 ರಲ್ಲಿ ತಹಶೀಲ್ದಾರ್, ಬೆಳ್ತಂಗಡಿ ತಾಲೂಕು ಇವರಿಗೆ ಪತ್ರ ವ್ಯವಹಾರವನ್ನು ನಡೆಸಲಾಗಿರುತ್ತದೆ.<br><br>ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಗಳೂರು ವಿಭಾಗ, ಮಂಗಳೂರು ರವರ ಪತ್ರ ದಿನಾಂಕ:08-03-2018 ರಲ್ಲಿ ಈ ಮೇಲೆ ತಿಳಿಸಿರುವ ಸರ್ವೆ ನಂಬರ್‌ಗಳ ಜಮೀನಿನಲ್ಲಿ ಅರಣ್ಯ ಇಲಾಖೆಗೆ ಸೇರಿದೆ ಎನ್ನಲಾದ ಸ್ಥಳವನ್ನು ಇಂಡೀಕರಿಸುವ ಬಗ್ಗೆ ಗೊಂದಲಗಳಿರುವುದರಿಂದ ಅಧಿಸೂಚನೆ ಅನುಸಾರ ಸ್ಥಳ ಮೋಜಣಿ ಮಾಡಿ, ನಂತರ ಗ್ರಾಮ ನಕಾಶೆಯಲ್ಲಿ ರಕ್ಷಿತಾರಣ್ಯದ ಗಡಿಯನ್ನು ಗುರುತಿಸಿಕೊಂಡು ಈ ಸರ್ವೆ ನಂಬರ್‌ಗಳಲ್ಲಿ ಮೀಸಲು ಅರಣ್ಯ / ಬ್ಲಾಕ್ / ಡೀಮ್ಡ್ ಫಾರೆಸ್ಟ್‌ಗಳಿಗೆ ಸೇರಿದ ಜಮೀನುಗಳನ್ನು ಗುರುತಿಸಿ ಆ ಪ್ರದೇಶವನ್ನು ಇಂಡೀಕರಿಸಲು ಅನುಕೂಲವಾಗುವಂತೆ ಸಿಬ್ಬಂದಿಗಳಿಂದ ಸದರಿ ಜಮೀನುಗಳ ಮೋಜಣಿ ಮಾಡಿಸಬೇಕೆಂದು ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ, ಶಿವಮೊಗ್ಗ ಇವರಿಗೆ ಪತ್ರ ಬರೆಯಲಾಗಿತ್ತು.<br><br>ಈ ಸಂಬಂಧ ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ. ಬಿ1 / ಕಾಯೋಶಿ / ಮೋಜಣಿ / ಸಿಆರ್. 14/ 2017-18, ದಿನಾಂಕ:26-09-2018 ರಲ್ಲಿ ಪ್ರದೇಶಗಳ ಸಂಪೂರ್ಣ ಸರ್ವೆ ಮಾಡುವ ಅವಶ್ಯಕತೆ ಇದ್ದು, ಸದರಿ ಅರಣ್ಯ ಪ್ರದೇಶಗಳ ಜಂಟಿ ಸರ್ವೆಗೆ ದಿನಾಂಕ ನಿಗದಿಪಡಿಸಿ ತಿಳಿಸಿದಲ್ಲಿ ಸದರಿ ದಿನದಂದು ಕಾರ್ಯಯೋಜನೆ ಘಟಕದ ವಲಯ ಅರಣ್ಯ ಅಧಿಕಾರಿ ಅಥವಾ ಉಪ ವಲಯ ಅರಣ್ಯ ಅಧಿಕಾರಿಯವರನ್ನು ಜಂಟಿ ಮೋಜಣಿ ಕಾರ್ಯಕ್ಕೆ ಹಾಜರಾಗಲು ಸೂಚಿಸಲಾಗುವುದು ಎಂದು ತಿಳಿಸಿರುತ್ತಾರೆ. |
| ಆ) | ಈ ಕುರಿತಂತೆ ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | |
| ಇ) | ಈ ಸರ್ವೆಯ ಆರ್‌ಟಿಸಿ ಯಲ್ಲಿ ಅರಣ್ಯವೆಂದು ನಮೂದಿಸಿದ್ದು, ಅರಣ್ಯವಲ್ಲದ ಜಮೀನನ್ನು ಸರ್ಕಾರಿ ಆರ್.ಟಿ.ಸಿ.ಯಲ್ಲಿ ನಮೂದಿಸಲಾಗಿದೆಯೇ; ಇದಕ್ಕೆ ಯಾವ ಕ್ರಮ ಕೈಗೊಂಡಿದೆ; (ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು) | |

<table>
<tr><td></td><td></td><td>ಚಾರ್ಮಾಡಿ ಕನಪ್ಪಾಡಿ ಬ್ಲಾಕ್, ಧರ್ಮಸ್ಥಳ ಮುಂಡಾಜೆ ಬ್ಲಾಕ್- IV & V ರ ವಿಸ್ತೀರ್ಣಗಳು ಅಧಿಸೂಚನೆಯಲ್ಲಿರುವ ವಿಸ್ತೀರ್ಣಕ್ಕೂ, ಆಕಾರ್‌ಬಂದ್‌ನ ವಿಸ್ತೀರ್ಣಕ್ಕೂ, ಸರ್ವೆ ಸೆಟಲ್‌ಮೆಂಟ್ ರಿಜಿಸ್ಟರ್ ವಿಸ್ತೀರ್ಣಕ್ಕೂ, ಕೈಬರಹದ ಆರ್.ಟಿ.ಸಿ ಯಲ್ಲಿನ ವಿಸ್ತೀರ್ಣಕ್ಕೂ, ತದನಂತರದಲ್ಲಿ ಬಂದ ಕಂಪ್ಯೂಟರೀಕೃತ ಆರ್.ಟಿ.ಸಿ ಯಲ್ಲಿನ ವಿಸ್ತೀರ್ಣಕ್ಕೂ ಮತ್ತು ಇತ್ತೀಚಿನ ಆರ್.ಟಿ.ಸಿ ಯಲ್ಲಿನ ವಿಸ್ತೀರ್ಣಕ್ಕೂ ಒಂದಕ್ಕೊಂದು ತಾಳೆಯಾಗದೇ ಇದ್ದು, ಈ ಬಗ್ಗೆ ಕಂದಾಯ ಇಲಾಖೆಯವರೊಂದಿಗೆ ಪತ್ರ ವ್ಯವಹಾರಗಳನ್ನು ಮಾಡಲಾಗಿರುತ್ತದೆ. ಕಂದಾಯ ಇಲಾಖೆಯವರು ಅರಣ್ಯ ಇಲಾಖೆಯ ಸಿಬ್ಬಂದಿಗಳೊಂದಿಗೆ ಈ ಹಿಂದೆ ಜಂಟಿ ಸರ್ವೆ ಮಾಡಿ ಗ್ರಾಮ ನಕಾಶೆಯಲ್ಲಿ ಚಾರ್ಮಾಡಿ ಕನಪ್ಪಾಡಿ ಬ್ಲಾಕ್, ಧರ್ಮಸ್ಥಳ ಮುಂಡಾಜೆ ಬ್ಲಾಕ್ IV & V ಗಳನ್ನು ಗುರುತಿಸಿರುತ್ತಾರೆ. ಆದರೂ ಅಧಿಸೂಚನೆಯನುಸಾರ ಇವುಗಳ ಸರ್ವೆ ಆಗಿರುವುದಿಲ್ಲ.<br><br>ಈಗಾಗಲೇ ಕೈಗೊಂಡಿರುವ ಜಂಟಿ ಸರ್ವೆ ವಿಷಯಕ್ಕೆ ಸಂಬಂಧಿಸಿದಂತೆ ಅರಣ್ಯ ಇಲಾಖೆಗೆ ಸೇರಿದ ಭೂ ವಿಸ್ತೀರ್ಣವನ್ನು ಇಂಡೀಕರಿಸುವ ಬಗ್ಗೆ ಗೊಂದಲಗಳಿರುವುದರಿಂದ ಅಧಿಸೂಚನೆ ಅನುಸಾರ ಸ್ಥಳ ಮೋಜಣಿ ಮಾಡಿ, ನಂತರ ಗ್ರಾಮ ನಕಾಶೆಯನ್ನು ರಕ್ಷಿತಾರಣ್ಯದ ಗಡಿಯನ್ನು ಗುರುತಿಸಿಕೊಂಡು ಈ ಸರ್ವೆ ನಂಬರ್‌ಗಳಲ್ಲಿ ಮೀಸಲು ಅರಣ್ಯ/ಬ್ಲಾಕ್/ಡೀಮ್ಡ್ ಫಾರೆಸ್ಟ್‌ಗಳಿಗೆ ಸೇರಬೇಕಾದ ಜಮೀನನ್ನು ಪ್ರತ್ಯೇಕಿಸಿ, ಗುರುತಿಸಿ ಆ ಪ್ರದೇಶವನ್ನು ಇಂಡೀಕರಿಸಲು ಕಂದಾಯ ಇಲಾಖೆಯವರೊಂದಿಗೆ ನಿಯಮಾನುಸಾರ ವ್ಯವಹರಿಸಲಾಗುತ್ತಿದೆ.<br><br>ಈ ಮೇಲಿನ ಅಂಶಗಳ ಹಿನ್ನೆಲೆಗಳಲ್ಲಿ ಚಾರ್ಮಾಡಿ-ಕನಪ್ಪಾಡಿ ಮೀಸಲು ಅರಣ್ಯ, ಧರ್ಮಸ್ಥಳ-ಮುಂಡಾಜೆ ಮೀಸಲು ಅರಣ್ಯ ವಿಸ್ತರಿತ ಬ್ಲಾಕ್- IV & V ಮೀಸಲು ಅರಣ್ಯಗಳ ಸಂಪೂರ್ಣ ವಿಸ್ತೀರ್ಣವನ್ನು ಅಧಿಸೂಚನೆಯನುಸಾರ (ಸರ್ವೆ ನಂ. ವಾರು ವಿಸ್ತೀರ್ಣ ಲಭ್ಯವಿಲ್ಲದ ಕಾರಣ) ಸಕ್ಷಮ ಪ್ರಾಧಿಕಾರವಾದ ಫಾರೆಸ್ಟ್ ಸರ್ವೆ ಆಫ್ ಇಂಡಿಯಾ, ಸರ್ವೆ ಆಫ್ ಇಂಡಿಯಾ ವತಿಯಿಂದ ಹಾಗೂ ಅರಣ್ಯ ಮತ್ತು ಕಂದಾಯ ಇಲಾಖೆಗಳ ಸಮನ್ವಯದೊಂದಿಗೆ ಮೋಜಣಿ ಮಾಡಿ ಸರಿಯಾದ ಗಡಿಗಳನ್ನು ನಿರ್ಧರಿಸುವ ಅಗತ್ಯವಿರುತ್ತದೆ. ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ.</td></tr>
<tr><td>ಈ)</td><td>ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿ ಅಕ್ರಮ-ಸಕ್ರಮ ಅರ್ಜಿ ವಿಲೇವಾರಿ ಯಾವ ಹಂತದಲ್ಲಿದೆ; ಇದರಲ್ಲಿ ಡೀಮ್ಡ್ ಫಾರೆಸ್ಟ್ ಎಂದು ನಮೂದಾಗಿರುವ ಅರ್ಜಿದಾರ ಫಲಾನುಭವಿಗಳಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಅರ್ಜಿ ವಿಲೇವಾರಿ ಕುರಿತಂತೆ ಸರ್ಕಾರವು ಯಾವ ಕ್ರಮ ಕೈಗೊಂಡಿದೆ;</td><td>ಬೆಳ್ತಂಗಡಿ ತಾಲ್ಲೂಕಿನಲ್ಲಿ ಅಕ್ರಮ-ಸಕ್ರಮದಡಿ ಸ್ವೀಕೃತವಾಗಿರುವ ಅರ್ಜಿಗಳ ವಿವರವನ್ನು ಈ ಕೆಳಗಿನಂತೆ ಸಲ್ಲಿಸಿದೆ.
<table>
<tr><th>ನಮೂನೆ</th><th>ಸ್ವೀಕೃತ</th><th>ಮಂಜೂರು</th><th>ತಿರಸ್ಕೃತ</th><th>ಒಟ್ಟು ವಿಲೇ</th><th>ಬಾಕಿ</th></tr>
<tr><td>50</td><td>23970</td><td>13026</td><td>10944</td><td>23970</td><td>0</td></tr>
<tr><td>53</td><td>27030</td><td>5098</td><td>17942</td><td>23040</td><td>3990</td></tr>
<tr><td>57</td><td>31123</td><td>0</td><td>0</td><td>0</td><td>31123</td></tr>
</table></td></tr>
</table>

| | | |
|---|---|---|
| | | 1. ಅಕ್ರಮ ಸಕ್ರಮ ರಡಿ ವಿಲೇವಾರಿಗೆ ಬಾಕಿ ಇರುವ ಅರ್ಜಿಗಳು ತನಿಖಾ ಹಂತದಲ್ಲಿದ್ದು, ಸಮಿತಿ ಮುಂದೆ ಮಂಡಿಸಲು ಬಾಕಿ ಇರುತ್ತದೆ.<br>2. ಪ್ರಸ್ತುತ ಬೆಳ್ತಂಗಡಿ ವಿಧಾನ ಸಭಾ ಕ್ಷೇತ್ರದಲ್ಲಿ ಬಗರ್ ಹುಕುಂ ಸಮಿತಿ ರಚನೆ ಆಗಿರುವುದಿಲ್ಲ.<br>3. ಬಗರ್ ಹುಕುಂ ಸಮಿತಿ ರಚನೆ ಆದ ತಕ್ಷಣ ಸದರಿ ಬಾಕಿ ಇರುವ ಅರ್ಜಿಗಳನ್ನು ನಿಯಮಾನುಸಾರ ತನಿಖೆ ಮಾಡಿ ಸಮಿತಿಯ ಮುಂದೆ ಮಂಡಿಸಿ ಶೀಘ್ರ ವಿಲೇವಾರಿ ಬಗ್ಗೆ ಕ್ರಮ ಕೈಗೊಳ್ಳಲಾಗುವುದು.<br><br>ಡೀಮ್ಡ್ ಫಾರೆಸ್ಟ್ ಪಟ್ಟಿಯಲ್ಲಿ ಸೇರಿರುವ ಪ್ರದೇಶಗಳಿಗೆ ಸಂಬಂಧಿಸಿದಂತೆ, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಮಟ್ಟದ ಸಮಿತಿಯು ಜನವಾಸ ಮಾಡುವ, ಕೃಷಿ ಭೂಮಿಗಳು, ಅತಿಕ್ರಮಣವಾಗಿರುವ ಪ್ರದೇಶಗಳು ಮತ್ತು ಮೂಲ ನಿವಾಸಿಗಳು ಹಾಗೂ ಆದಿವಾಸಿಗಳು ವಾಸಿಸುತ್ತಿರುವ ಪ್ರದೇಶಗಳನ್ನು ಕೈಬಿಟ್ಟು, ಡೀಮ್ಡ್ ಫಾರೆಸ್ಟ್ ಪಟ್ಟಿಯನ್ನು ಅಂತಿಮಗೊಳಿಸಿರುವುದರಿಂದ ಸಕ್ರಮಾತಿಯ ಕುರಿತು ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ) | ಈ ರಕ್ಷಿತಾರಣ್ಯದ ಜಂಟಿ ಸರ್ವೆ ಕಾರ್ಯ ನಡೆದಿದೆಯೇ? (ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು) | ಜಂಟಿ ಸರ್ವೆ ವಿಷಯಕ್ಕೆ ಸಂಬಂಧಿಸಿದಂತೆ ಅರಣ್ಯ ಇಲಾಖೆಗೆ ಸೇರಿದ ಭೂ ವಿಸ್ತೀರ್ಣವನ್ನು ಇಂಡೀಕರಿಸುವ ಬಗ್ಗೆ ಗೊಂದಲಗಳಿರುವುದರಿಂದ ಅಧಿಸೂಚನೆ ಅನುಸಾರ ಸ್ಥಳ ಮೋಜಣಿ ಮಾಡಿ, ನಂತರ ಗ್ರಾಮ ನಕಾಶೆಯಲ್ಲಿ ರಕ್ಷಿತಾರಣ್ಯದ ಗಡಿಯನ್ನು ಗುರುತಿಸಿಕೊಂಡು ಈ ಸರ್ವೆ ನಂಬರ್‌ಗಳಲ್ಲಿ ಮೀಸಲು ಅರಣ್ಯ/ಬ್ಲಾಕ್/ಡೀಮ್ಡ್ ಫಾರೆಸ್ಟ್‌ಗಳಿಗೆ ಸೇರಬೇಕಾದ ಜಮೀನನ್ನು ಪ್ರತ್ಯೇಕಿಸಿ, ಗುರುತಿಸಿ ಆ ಪ್ರದೇಶವನ್ನು ಇಂಡೀಕರಿಸಲು ಕಂದಾಯ ಇಲಾಖೆಯೊಂದಿಗೆ ವ್ಯವಹರಿಸಲಾಗುತ್ತಿದೆ. |

ಸಂಖ್ಯೆ: ಅಪಜೀ 22 ಎಫ್‌ಎಎಫ್ 2019

(ಸತೀಶ್.ಎಲ್.ಜಾರಕಿಹೊಳಿ)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು